## 75. ಅಲ್ ಕಿಯಾಮಃ

ಸೂ. 40 ರು. 2

سُورَةُ الْقِيٰمَةِ مَكِّيَّةٌ

(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಅಲ್ಲ;[1] ನಾನು ಪುನರುತ್ಥಾನ ದಿನದ ಆಣೆ ಹಾಕುತ್ತೇನೆ-[2]

لَآ اُقْسِمُ بِيَوْمِ الْقِيٰمَةِ ۝١

2. ಮತ್ತು ಅಲ್ಲ, ನಾನು ಹಳಿಯುವ ಚಿತ್ತದ ಆಣೆ ಹಾಕುತ್ತೇನೆ.[3]

وَلَآ اُقْسِمُ بِالنَّفْسِ اللَّوَّامَةِ ۝٢

3. ನಾವು ಅವನ ಎಲುಬುಗಳನ್ನು ಒಟ್ಟುಗೂಡಿಸಲಾರೆವೆಂದು ಮಾನವನು ಭಾವಿಸುತ್ತಿರುವನೇ?

اَيَحْسَبُ الْاِنْسَانُ اَلَّنْ نَّجْمَعَ عِظَامَهٗ ۝٣

4. ಯಾಕಿಲ್ಲ? ನಾವಂತು ಅವನ ಬೆರಳುಗಳ ತುದಿಗಳನ್ನು ಕೂಡಾ ಸರಿಯಾಗಿ ರಚಿಸಲು ಶಕ್ತರಾಗಿದ್ದೇವೆ.

بَلٰى قٰدِرِيْنَ عَلٰٓى اَنْ نُّسَوِّيَ بَنَانَهٗ ۝٤

5. ಆದರೆ ಮಾನವನು ಮುಂದೆಯೂ ತಾನು ದುಷ್ಕರ್ಮಗಳನ್ನು ಮಾಡುತ್ತಿರಬೇಕೆಂದು ಇಚ್ಛಿಸುತ್ತಾನೆ.[4]

بَلْ يُرِيْدُ الْاِنْسَانُ لِيَفْجُرَ اَمَامَهٗ ۝٥

6. ಆ ಪುನರುತ್ಥಾನ ದಿನ ಬರುವುದಾದರೂ ಯಾವಾಗ? ಎಂದು ಕೇಳುತ್ತಾನೆ.

يَسْـَٔلُ اَيَّانَ يَوْمُ الْقِيٰمَةِ ۝٦

---

1. 'ಅಲ್ಲ' ಎಂದು ಮಾತನ್ನು ಆರಂಭಿಸಿರುವುದರಿಂದ ಸ್ವತಃ ವ್ಯಕ್ತವಾಗುವುದೇನೆಂದರೆ ಮೊದಲಿನಿಂದಲೇ ಯಾವುದೋ ವಿಷಯದ ಬಗ್ಗೆ ಚರ್ಚೆ ನಡೆಯುತ್ತಿತ್ತು. ಅದರ ನಿರಾಕರಣೆಗಾಗಿ ಈ ಅಧ್ಯಾಯವು ಅವತೀರ್ಣಗೊಂಡಿದೆ. ಇಲ್ಲಿ 'ಅಲ್ಲ' ಎಂದು ಹೇಳಿರುವುದರ ಅರ್ಥವೇನೆಂದರೆ- ನೀವು ಭಾವಿಸುತ್ತಿರುವ ವಿಷಯ ಸರಿಯಲ್ಲ. ಸತ್ಯಸಂಗತಿ ಇಂತಿದೆ ಎಂದು ನಾನು ಆಣೆ ಹಾಕಿ ಹೇಳುತ್ತೇನೆ.
2. ಪುನರುತ್ಥಾನ ದಿನದ ಆಗಮನದ ಬಗ್ಗೆ ಪುನರುತ್ಥಾನ ದಿನದ ಆಣೆಯನ್ನೇ ಹಾಕಲಾಗಿದೆ. ಏಕೆಂದರೆ ಅದರ ಆಗಮನವು ಖಚಿತವಾಗಿದೆ. ಲೋಕದ ಈ ವ್ಯವಸ್ಥೆ ಅನಾದಿಯಾಗಲಿ, ಅನಂತವಾಗಲಿ ಅಲ್ಲವೆಂಬುದಕ್ಕೆ ಲೋಕದ ಸಮಸ್ತ ವ್ಯವಸ್ಥೆಯೇ ಸಾಕ್ಷ್ಯ ನುಡಿಯುತ್ತಿದೆ. ಇದು ಅನಾದಿಯಿಂದ ಅಸ್ತಿತ್ವದಲ್ಲಿರಲಿಲ್ಲ ಮತ್ತು ಇದಕ್ಕೆ ಖಂಡಿತವಾಗಿಯೂ ಅಂತ್ಯದಿನ ಬರಲಿದೆ.
3. ಅರ್ಥಾತ್- ಯಾವುದೇ ಕೆಡುಕಿನ ವೇಳೆ ಮಾನವನನ್ನು ಹಳಿಯುವ ಆತ್ಮಸಾಕ್ಷಿಯ ಆಣೆ, ಮಾನವನಲ್ಲಿ ಈ ಪ್ರಜ್ಞೆ ಅಸ್ತಿತ್ವದಲ್ಲಿರುವುದು ಅವನು ತನ್ನ ಕರ್ಮಗಳಿಗೆ ಜವಾಬ್ದಾರನೆಂಬುದಕ್ಕೆ ಸಾಕ್ಷಿಯಾಗಿದೆ.
4. ಅರ್ಥಾತ್- ಪುನರುತ್ಥಾನ ದಿನದ ನಿರಾಕರಣೆಗೆ ಮೂಲ ಕಾರಣ, ಅದೆಂದೂ ಸಂಭವಿಸಲಾರದು ಅಥವಾ ಸಂಭವಿಸಲು ಸಾಧ್ಯವಿಲ್ಲವೆಂಬ ಯಾವುದೇ ವೈಜ್ಞಾನಿಕ ಮತ್ತು ಬೌದ್ಧಿಕ ಪುರಾವೆಗಳಲ್ಲ.

7. ದೃಷ್ಟಿಗಳು ಸ್ತಬ್ಧವಾಗಿ ಬಿಡುವಾಗ-

فَإِذَا بَرِقَ الْبَصَرُ ۝٧

8. ಮತ್ತು ಚಂದ್ರನು ಕಳೆಗುಂದುವಾಗ-

وَخَسَفَ الْقَمَرُ ۝٨

9. ಸೂರ್ಯ ಚಂದ್ರರನ್ನು ಸೇರಿಸಿ ಒಂದಾಗಿಸಿದಾಗ-

وَجُمِعَ الشَّمْسُ وَالْقَمَرُ ۝٩

10. ಆಗ ಇದೇ ಮನುಷ್ಯ, "ಎಲ್ಲಿಗೆ ಓಡಿ ಹೋಗಲಿ!" ಎಂದು ಹೇಳುವನು.

يَقُولُ الْإِنسَانُ يَوْمَئِذٍ أَيْنَ الْمَفَرُّ ۝١٠

11. ಖಂಡಿತ ಇಲ್ಲ, ಅಲ್ಲಿ ಯಾವ ಅಭಯಸ್ಥಾನವೂ ಇರಲಾರದು.

كَلَّا لَا وَزَرَ ۝١١

12. ಅಂದು ನಿನ್ನ ಪ್ರಭುವಿನ ಮುಂದೆಯೇ ಹೋಗಿ ನಿಲ್ಲಬೇಕಾಗುವುದು.

إِلَىٰ رَبِّكَ يَوْمَئِذٍ الْمُسْتَقَرُّ ۝١٢

13. ಅಂದು ಮಾನವನಿಗೆ ಅವನ ಹಿಂದಿನ-ಮುಂದಿನ ಸಕಲ ಕರ್ಮಗಳನ್ನೂ ತೋರಿಸಿ ಕೊಡಲಾಗುವುದು.

يُنَبَّأُ الْإِنسَانُ يَوْمَئِذٍ بِمَا قَدَّمَ وَأَخَّرَ ۝١٣

14. ವಾಸ್ತವದಲ್ಲಿ ಮಾನವನು ತಾನೇ ತನ್ನನ್ನು ಚೆನ್ನಾಗಿ ಬಲ್ಲನು-

بَلِ الْإِنسَانُ عَلَىٰ نَفْسِهِ بَصِيرَةٌ ۝١٤

15. ಅವನು ಎಷ್ಟೇ ನೆಪಗಳನ್ನೊಡ್ಡಿದರೂ ಸರಿ.[5]

وَلَوْ أَلْقَىٰ مَعَاذِيرَهُ ۝١٥

16. ಸಂದೇಶವಾಹಕರೇ,[6] ಈ 'ದಿವ್ಯವಾಣಿ'ಯನ್ನು ಬೇಗ ಬೇಗನೆ ಕಂಠ ಪಾಠ ಮಾಡಿಕೊಳ್ಳಲಿಕ್ಕಾಗಿ ನಿಮ್ಮ ನಾಲಗೆಯನ್ನು ಚಲಿಸಬೇಡಿರಿ.

لَا تُحَرِّكْ بِهِ لِسَانَكَ لِتَعْجَلَ بِهِ ۝١٦

17. ಇದನ್ನು ಕಂಠಪಾಠ ಮಾಡಿಸುವ ಮತ್ತು ಓದಿಸುವ ಹೊಣೆ ನಮ್ಮ ಮೇಲಿದೆ.

إِنَّ عَلَيْنَا جَمْعَهُ وَقُرْآنَهُ ۝١٧

18. ಆದುದರಿಂದ ನಾವು ಇದನ್ನು ಓದುತ್ತಿರುವಾಗ ನೀವು ಇದರ ಪಠಣವನ್ನು ಗಮನವಿಟ್ಟು ಆಲಿಸುತ್ತಿರಿ.

فَإِذَا قَرَأْنَاهُ فَاتَّبِعْ قُرْآنَهُ ۝١٨

---

5. ಅರ್ಥಾತ್- ವ್ಯಕ್ತಿಯ ಮುಂದೆ ಕರ್ಮಪಟ್ಟಿಯನ್ನು ಇರಿಸುವುದರ ಉದ್ದೇಶ ಅಪರಾಧಿಗೆ ಅವನ ಅಪರಾಧವನ್ನು ತೋರಿಸುವುದಲ್ಲ. ನ್ಯಾಯಾಲಯದ ಮೂಲಕ ಅಪರಾಧದ ಸಾಕ್ಷಿಗಳನ್ನು ಸಮರ್ಪಿಸದೆ ನ್ಯಾಯದ ಬೇಡಿಕೆ ಈಡೇರಲಾರದು ಎಂಬ ಕಾರಣಕ್ಕಾಗಿ ಮಾತ್ರ ಹೀಗೆ ಮಾಡಲಾಗುತ್ತದೆ. ಅನ್ಯಥಾ ತಾನೇನಾಗಿದ್ದೇನೆ ಎಂಬುದು ಮನುಷ್ಯನಿಗೆ ಸ್ವತಃ ಚೆನ್ನಾಗಿ ತಿಳಿದಿದೆ.

6. ಇಲ್ಲಿಂದ, "ಅನಂತರ ಇದರ ತಾತ್ಪರ್ಯವನ್ನು ವಿವರಿಸುವ ಹೊಣೆಯೂ ನಮ್ಮ ಮೇಲೆಯೇ ಇದೆ" ಎಂಬ ವರೆಗಿನ ಉದ್ಧರಣೆ ಒಂದು ಉಪಮಾತಾಗಿದೆ. ವಾಕ್ಸರಣಿಯನ್ನು ನಡುವೆ ಮುರಿದು ಪ್ರವಾದಿವರ್ಯರನ್ನುದ್ದೇಶಿಸಿ(ಸ) ಈ ಮಾತು ಹೇಳಲಾಗಿದೆ. ಜಿಬ್‌ರೀಲ್(ಅ) ಈ ಅಧ್ಯಾಯವನ್ನು ಪ್ರವಾದಿವರ್ಯರಿಗೆ(ಸ) ಕೇಳಿಸುವಾಗ ತನಗೆಲ್ಲಿ ಇದು ಮರೆತು ಹೋಗುವುದೋ ಎಂಬ ಶಂಕೆಯಿಂದ ಅವರು ಇದನ್ನು ನಾಲಗೆಯಿಂದ ಪುನರಾವರ್ತಿಸಲು ಪ್ರಯತ್ನಿಸುತ್ತಿದ್ದರು.

19. ಅನಂತರ ಇದರ ತಾತ್ಪರ್ಯವನ್ನು ವಿವರಿಸುವ ಹೊಣೆಯೂ ನಮ್ಮ ಮೇಲೆಯೇ ಇದೆ-

ثُمَّ إِنَّ عَلَيْنَا بَيَانَهُۥ ﴿١٩﴾

20. ಖಂಡಿತ ಅಲ್ಲ.[7] ವಾಸ್ತವದಲ್ಲಿ ನೀವು ಶೀಘ್ರ ಪ್ರಾಪ್ತವಾಗುವ ವಸ್ತುವನ್ನು (ಇಹಲೋಕವನ್ನು) ಪ್ರೀತಿಸುತ್ತೀರಿ-

كَلَّا بَلْ تُحِبُّونَ ٱلْعَاجِلَةَ ﴿٢٠﴾

21. ಮತ್ತು ಪರಲೋಕವನ್ನು ಬಿಟ್ಟು ಬಿಡುತ್ತೀರಿ.

وَتَذَرُونَ ٱلْـَٔاخِرَةَ ﴿٢١﴾

22. ಆ ದಿನ ಕೆಲವು ಮುಖಗಳು ಅರಳಿರುವುವು-

وُجُوهٌ يَوْمَئِذٍ نَّاضِرَةٌ ﴿٢٢﴾

23. ತಮ್ಮ ಪ್ರಭುವನ್ನು ನೋಡುತ್ತಿರುವುವು-

إِلَىٰ رَبِّهَا نَاظِرَةٌ ﴿٢٣﴾

24. ಮತ್ತು ಇನ್ನು ಕೆಲವು ಮುಖಗಳು ಖಿನ್ನವಾಗಿರುವುವು-

وَوُجُوهٌ يَوْمَئِذٍۭ بَاسِرَةٌ ﴿٢٤﴾

25. ಮತ್ತು ತಮ್ಮೊಂದಿಗೆ ಸೊಂಟ ಮುರಿಯುವ ರೀತಿಯಲ್ಲಿ ವರ್ತಿಸಲಾಗುವುದೆಂದು ಭಾವಿಸುತ್ತಿರುವುವು.

تَظُنُّ أَن يُفْعَلَ بِهَا فَاقِرَةٌ ﴿٢٥﴾

26. ಖಂಡಿತ ಅಲ್ಲ,[8] ಪ್ರಾಣವು ಗಂಟಲಿಗೆ ತಲಪುವಾಗ-

كَلَّآ إِذَا بَلَغَتِ ٱلتَّرَاقِىَ ﴿٢٦﴾

27. ಮಾಂತ್ರಿಕನು ಯಾರಾದರೂ ಇದ್ದಾನೆಯೇ ಎಂದು ಕೇಳಲಾಗುವಾಗ-

وَقِيلَ مَنْ ۜ رَاقٍ ﴿٢٧﴾

28. ಮತ್ತು ಇದು (ಭೂಲೋಕದಿಂದ) ಅಗಲುವ ಸಮಯವೆಂದು ಮನುಷ್ಯನಿಗೆ ಮನವರಿಕೆಯಾಗುವಾಗ-

وَظَنَّ أَنَّهُ ٱلْفِرَاقُ ﴿٢٨﴾

29. ಮತ್ತು ಮೊಣಕಾಲಿನೊಂದಿಗೆ ಮೊಣಕಾಲು ಸೇರಿಕೊಳ್ಳುವಾಗ-

وَٱلْتَفَّتِ ٱلسَّاقُ بِٱلسَّاقِ ﴿٢٩﴾

30. ಅದು ನಿನ್ನ ಪ್ರಭುವಿನ ಕಡೆಗೆ ಹೊರಡುವ ದಿನವಾಗಿರುವುದು.

إِلَىٰ رَبِّكَ يَوْمَئِذٍ ٱلْمَسَاقُ ﴿٣٠﴾ ع

31. ಆದರೆ, ಅವನು ಸತ್ಯವೆಂದು ಅಂಗೀಕರಿಸಲೂ ಇಲ್ಲ, ನಮಾಝ್ ನಿರ್ವಹಿಸಲೂ ಇಲ್ಲ-

فَلَا صَدَّقَ وَلَا صَلَّىٰ ﴿٣١﴾

32. ನಿಜವಾಗಿ ಅವನು ಸುಳ್ಳಾಗಿಸಿದನು ಮತ್ತು ವಿಮುಖನಾದನು-

وَلَٰكِن كَذَّبَ وَتَوَلَّىٰ ﴿٣٢﴾

---

7. ಇಲ್ಲಿಂದ ಉಪಮಾತಿಗಿಂತ ಮೊದಲು ಪ್ರಸ್ತಾಪಿಸಲಾದ ವಿಷಯದ ಜತೆ ವಾಕ್ಸರಣಿ ಸೇರುತ್ತದೆ. "ಖಂಡಿತಾ ಅಲ್ಲ" ಎಂದರೆ ನೀವು ಪುನರುತ್ಥಾನ ದಿನವನ್ನು ನಿರಾಕರಿಸುವುದಕ್ಕೆ ಮೂಲ ಕಾರಣ, ನಿಸರ್ಗದ ಸೃಷ್ಟಿಕರ್ತನಿಗೆ ಪುನರುತ್ಥಾನ ದಿನವನ್ನು ತರಲು ಹಾಗೂ ಮರಣಾನಂತರ ಸೃಷ್ಟಿ ಮಾಡಲು ಸಾಧ್ಯವಿಲ್ಲವೆಂಬ ನಿಮ್ಮ ಭಾವನೆ ಕಾರಣವಲ್ಲ. ಬದಲಾಗಿ ಅದರ ನೈಜ ಕಾರಣ ಇಂತಿದೆ.

8. "ಖಂಡಿತಾ ಅಲ್ಲ" ಎಂಬ ಪದ ಮೇಲಿನಿಂದ ಪ್ರಸ್ತಾಪಿಸುತ್ತಾ ಬರಲಾಗಿರುವ ವಾಕ್ಸರಣಿಗೆ ಸಂಬಂಧಿಸಿದೆ. ಅರ್ಥಾತ್, ಸತ್ತು ನಶಿಸಿ ಹೋಗಬೇಕು ಮತ್ತು ನಿಮ್ಮ ಪ್ರಭುವಿನೆಡೆಗೆ ಮರಳ ಬೇಕಾಗಿಲ್ಲವೆಂಬ ನಿಮ್ಮ ಭಾವನೆ ತಪ್ಪು.

33. ತರುವಾಯ, ಸೆಟೆದುಕೊಂಡು ತನ್ನ ಮನೆಯವರ ಕಡೆಗೆ ನಡೆದು ಬಿಟ್ಟನು.

ثُمَّ ذَهَبَ إِلَىٰ أَهْلِهِ يَتَمَطَّىٰ ﴿٣٣﴾

34. ಈ ವರ್ತನೆ ನಿನಗೆ ತಕ್ಕುದಾಗಿಯೇ ಇದೆ ಮತ್ತು ಇದು ನಿನಗೇ ಭೂಷಣವಾಗಿದೆ-

أَوْلَىٰ لَكَ فَأَوْلَىٰ ﴿٣٤﴾

35. ಹೌದು, ಈ ವರ್ತನೆ ನಿನಗೆ ತಕ್ಕುದಾಗಿಯೇ ಇದೆ ಮತ್ತು ಇದು ನಿನಗೇ ಭೂಷಣವಾಗಿದೆ.

ثُمَّ أَوْلَىٰ لَكَ فَأَوْلَىٰ ﴿٣٥﴾

36. ಮಾನವನು ತನ್ನನ್ನು ಸುಮ್ಮನೆ ಬಿಟ್ಟುಬಿಡಲಾಗುವುದೆಂದು ಭಾವಿಸಿ ಕೊಂಡಿರುವನೇ?[9]

أَيَحْسَبُ الْإِنسَانُ أَن يُتْرَكَ سُدًى ﴿٣٦﴾

37. ಅವನು (ತಾಯಿಯ ಗರ್ಭದೊಳಗೆ) ಸುರಿಸಲ್ಪಡುವಂತಹ ಒಂದು ತುಚ್ಛ ವೀರ್ಯ ಬಿಂದುವಾಗಿರಲಿಲ್ಲವೇ?

أَلَمْ يَكُ نُطْفَةً مِّن مَّنِيٍّ يُمْنَىٰ ﴿٣٧﴾

38. ತರುವಾಯ ಅವನು ಒಂದು ಪಿಂಡವಾದನು. ಅನಂತರ ಅಲ್ಲಾಹನು ಅವನ ಶರೀರವನ್ನು ನಿರ್ಮಿಸಿದನು ಮತ್ತು ಅವನ ಅಂಗಾಂಗಳನ್ನು ರೂಪಿಸಿದನು-

ثُمَّ كَانَ عَلَقَةً فَخَلَقَ فَسَوَّىٰ ﴿٣٨﴾

39. ಆ ಬಳಿಕ ಅದರಿಂದ ಪುರುಷ ಮತ್ತು ಸ್ತ್ರೀಯ ಎರಡು ವರ್ಗಗಳನ್ನು ಮಾಡಿದನು.

فَجَعَلَ مِنْهُ الزَّوْجَيْنِ الذَّكَرَ وَالْأُنثَىٰ ﴿٣٩﴾

40. ಅವನು ಮೃತರನ್ನು ಪುನಃ ಜೀವಂತಗೊಳಿಸಲು ಶಕ್ತನಲ್ಲವೇ?

أَلَيْسَ ذَٰلِكَ بِقَادِرٍ عَلَىٰ أَن يُحْيِيَ الْمَوْتَىٰ ﴿٤٠﴾

---

9. ಮೂಲದಲ್ಲಿ 'ಸುದಾ' ಎಂಬ ಪದ ಪ್ರಯೋಗವಾಗಿದೆ. ಅರಬಿಯಲ್ಲಿ ಎಲ್ಲಿ ಬೇಕಾದರೂ ಸುತ್ತಾಡಲು ಬಿಟ್ಟು ನಿಯಂತ್ರಕರಾರೂ ಇಲ್ಲದ ಒಂಟೆಯನ್ನು 'ಇಬ್‌ಲುನ್ ಸುದಾ' ಎಂದು ಕರೆಯಲಾಗುತ್ತದೆ. ಅರ್ಥಾತ್, ಲಂಗುಲಗಾಮಿಲ್ಲದ ಒಂಟೆ.